# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ | : | 270 |
| ಸದಸ್ಯರ ಹೆಸರು | : | ಶ್ರೀ ಎನ್.ಎಸ್. ಬೋಸರಾಜು (ವಿಧಾನ ಸಭೆಯಿಂದ ಚುಯಿತರಾದವರು) |
| ಉತ್ತರಿಸುವ ಸಚಿವರು | : | ಕಂದಾಯ ಸಚಿವರು |
| ಉತ್ತರಿಸುವ ದಿನಾಂಕ | : | 04.03.2020 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ನಗರದಲ್ಲಿ ನಿರ್ಮಾಣ ಹಂತದಲ್ಲಿರುವ ಜಿಲ್ಲಾಡಳಿತ ಭವನಕ್ಕೆ ಮಂಜೂರಾಗಿರುವ ಅನುದಾನ ಎಷ್ಟು; ಇಲ್ಲಿಯವರೆವಿಗೂ ಖರ್ಚು ಮಾಡಿರುವ ಅನುದಾನ ಎಷ್ಟು; ಕಾಮಗಾರಿ ಪೂರ್ಣಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ರಾಯಚೂರು ಜಿಲ್ಲಾ ಕಛೇರಿಗಳ ಸಂಕೀರ್ಣ ಕಟ್ಟಡ ಕಾಮಗಾರಿಯನ್ನು ರೂ.2500.00 ಲಕ್ಷಗಳ ಮೊತ್ತದಲ್ಲಿ ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಈ ಕಾಮಗಾರಿಗೆ ಇಲ್ಲಿಯವರೆಗೆ ರೂ.452.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಪ್ರಸ್ತುತ ಕಾಮಗಾರಿ ಪ್ರಗತಿಯಲ್ಲಿದೆ. |
| ಆ) | ರಾಯಚೂರು ಜಿಲ್ಲೆಯಲ್ಲಿರುವ ನೂತನ ತಾಲ್ಲೂಕು ಸಿರವಾರ, ಮಸ್ಕಿ ತಾಲ್ಲೂಕುಗಳನ್ನು ಅಭಿವೃದ್ಧಿ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ಹೊಸದಾಗಿ ರಚಿತಗೊಂಡಿರುವ ತಾಲ್ಲೂಕುಗಳ ಆಡಳಿತಾತ್ಮಕ ಪ್ರಕ್ರಿಯೆಯನ್ನು ಪ್ರಾರಂಭಿಸುವ ಸಲುವಾಗಿ 2017-18ನೇ ಸಾಲಿನಲ್ಲಿ ತಲಾ ರೂ.10.00 ಲಕ್ಷಗಳಂತೆ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.<br><br>2018-19ನೇ ಸಾಲಿನಲ್ಲಿಹೊಸ ತಾಲ್ಲೂಕು ಕಛೇರಿಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಪ್ರತಿ ತಾಲ್ಲೂಕಿಗೆ ತಲಾ ರೂ.10.00 ಲಕ್ಷಗಳಂತೆ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.<br><br>2019-20ನೇ ಸಾಲಿನಲ್ಲಿ ಹೊಸ ತಾಲ್ಲೂಕು ಕಛೇರಿಗಳಿಗೆ ಆಡಳಿತಾತ್ಮಕ ಇತರೆ ಖರ್ಚುಗಳನ್ನು ಭರಿಸಲು ಪ್ರತಿ ತಾಲ್ಲೂಕಿಗೆ ತಲಾ ರೂ.5.00 ಲಕ್ಷಗಳಂತೆ |

| | | |
|---|---|---|
| | | ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ. |
| ಇ) | ರಾಯಚೂರು ಜಿಲ್ಲೆಯಲ್ಲಿರುವ ತಾಂಡಾ, ಗೊಲ್ಲರಹಟ್ಟಿ ಕ್ಯಾಂಪ್‌ಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಇಲ್ಲಿಯವರೆಗೂ ಎಷ್ಟು ಕಂದಾಯ ಗ್ರಾಮಗಳನ್ನಾಗಿ ಪರಿವರ್ತಿಸಲಾಗಿದೆ. | ರಾಯಚೂರು ಜಿಲ್ಲೆಯಲ್ಲಿರುವ ತಾಂಡಾ, ಗೊಲ್ಲರಹಟ್ಟಿ ಕ್ಯಾಂಪ್ ಇತ್ಯಾದಿ ದಾಖಲೆ ರಹಿತ ಜನವಸತಿಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲು ಇಲ್ಲಿಯವರೆಗೆ 87 ದಾಖಲೆ ರಹಿತ ಜನವಸತಿಗಳನ್ನು ಗುರುತಿಸಲಾಗಿದ್ದು, ಈ ಪೈಕಿ ಸರ್ಕಾರಿ ಜಮೀನಿನಲ್ಲಿ ನೆಲೆಗೊಂಡಿರುವ 2 ಜನವಸತಿಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲು ಪ್ರಾಥಮಿಕ ಅಧಿಸೂಚನೆ ಹೊರಡಿಸಲಾಗಿದೆ. ಉಳಿದಂತೆ ಖಾಸಗಿ ಜಮೀನಿನಲ್ಲಿ ನೆಲೆಗೊಂಡಿರುವ 73 ಜನವಸತಿಗಳಿರುವ ಜಾಗವನ್ನು ಕರ್ನಾಟಕ ಭೂ ಸುಧಾರಣಾ ಕಾಯ್ದೆಯ ತಿದ್ದುಪಡಿ ಅಧಿನಿಯಮದಂತೆ ಸರ್ಕಾರದಲ್ಲಿ ನಿಹಿತಗೊಳಿಸಿ ಪ್ರಸ್ತಾವನೆ ಸಲ್ಲಿಸಲು ಹಾಗೂ ಅರಣ್ಯ ಭೂಮಿಯಲ್ಲಿ ನೆಲೆಗೊಂಡಿರುವ 3 ಜನವಸತಿಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲು ಅರಣ್ಯ ಹಕ್ಕು ಕಾಯ್ದೆಯ ನಿಯಮಗಳಂತೆ ಪ್ರಸ್ತಾವನೆ ಸಲ್ಲಿಸಲು ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ. ಉಳಿಕೆ 9 ಜನವಸತಿಗಳಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳಿಂದ ಪ್ರಸ್ತಾವನೆ ನಿರೀಕ್ಷಿಸಲಾಗಿದೆ. |

**ಕಂಇ 10 ಡಬ್ಲ್ಯೂಬಿಆರ್ 2020**

**(ಆರ್. ಅಶೋಕ)**

ಕಂದಾಯ ಸಚಿವರು